ಒಂದೊಂದು ಕವನವೂ ಭರವಸೆಯ ವ್ಯವಸಾಯ
ಅಜ್ಞಾತದ ತಳಕ್ಕಿಳಿದು ಬಂದವನ ಭಾಗ್ಯ

–ರಾಮಚಂದ್ರಶರ್ಮ

---

# ಸಂಚಯ


ಕಲಾಸಕ್ತರ ದ್ವೈಮಾಸಿಕ

ಸಂಚಿಕೆ : 16 (ಖಾಸಗಿ ಪ್ರಸಾರಕ್ಕಾಗಿ) ಮಾರ್ಚಿ 1990


---

ಪ್ರಿಯರೇ,

ನಿಮ್ಮಗಳೆಲ್ಲರ ಪ್ರೋತ್ಸಾಹದಿಂದ ಸಂಚಯ ಉತ್ತಮವಾಗಿ ಪ್ರತಿ ಸಂಚಿಕೆಯಲ್ಲೂ ಒಂದಷ್ಟು ಹೊಸದನ್ನ ಕೊಡಲು ಪ್ರಯತ್ನಿಸುತ್ತಿದೆ. ನಮ್ಮ ನಡುವೆ ಅದರಲ್ಲೂ ಸಾಹಿತ್ಯದ ಬಗೆಗಿನ ಪತ್ರಿಕೆಗಳಂತೂ ಅನೇಕ ಸಲ ಹುಟ್ಟುತ್ತಾ ಬದುಕುತ್ತಾ ಸಾವು ಕಾಣುತ್ತಿರುತ್ತವೆ. ಅನೇಕರಿಗೆ ಚಂದಾ ಹಣ ದುಬಾರಿಯಲ್ಲ ಅಥವಾ ಕೊಡಬಾರದೆನ್ನುವ ಮನಸ್ಸೂ ಇಲ್ಲ. ಆದರೆ ಆ ಕೊಡುವ ಕೆಲಸ ಮಾತ್ರ ಮರೆತೋ ಅಥವಾ ಇನ್ನೊಮ್ಮೆ ಎಂದೋ ಮುಂದೂಡಲ್ಪಡುತ್ತೆ. ದಯವಿಟ್ಟು ಚಂದಾ ಹಣ ಕಳುಹಿಸಿ ಕೊಡಿ. ನಿಮ್ಮ ಗೆಳೆಯರನ್ನೂ ಚಂದಾದಾರರನ್ನಾಗಿ ಮಾಡಿ.

ಸಂಚಯ ತಡವಾದುದಕ್ಕೆ ಕ್ಷಮಿಸಿ.

–ಸಂಪಾದಕ

---


ಸಂಪಾದಕರು : ಡಿ. ವಿ. ಪ್ರಹ್ಲಾದ್ ಮತ್ತು ಮಂಡಳಿ

ವಾರ್ಷಿಕ ಚಂದಾ : ರೂ. 25-00

ಮುಖಚಿತ್ರ : ಎಸ್. ಧನಲಕ್ಷ್ಮಿ

ಕೃಪೆ : ಲಲಿತ ಕಲಾ ಅಕಾಡೆಮಿ

ಸಂಚಯದ ವಿಳಾಸ : ನಂ. 28, ಮಾರಮ್ಮನ ದೇವಸ್ಥಾನದ ರಸ್ತೆ
8ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು–560 003

ವಿದ್ಯಮಾನ :

# ಜಾಗೃತ ಸಾಹಿತ್ಯ ಸಮಾವೇಶ – ಒಂದು ನೋಟ

---

ಕಿರಣ್ ಸಿಂಗ್

ಇತ್ತೀಚೆಗಷ್ಟೆ ಜಡವಾಗಿದ್ದ ನಮ್ಮ ಕನ್ನಡ ಸಾಹಿತಿ ಹಾಗೂ ಸಾಹಿತ್ಯಪರಿಸರವನ್ನು ಎಚ್ಚರಿಸಿದ ಕೀರ್ತಿ ಸಾಹಿತ್ಯ ಪರಿಷತ್ತಿನದು. 59ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಆರ್. ಸಿ. ಹಿರೇಮಠರ ವಿವಾದಾತ್ಮಕ ಆಯ್ಕೆ ಮಾಡುವುದರ ಮೂಲಕ ತೂಕಡಿಸುತ್ತಿದ್ದ (ಅಥವಾ ಒಳಗೇ ಎಚ್ಚರಗೊಂಡಿದ್ದ) ಬರಹಗಾರರನ್ನ ತಟ್ಟಿ ಎಬ್ಬಿಸಿದ ಪರಿಷತ್ತು ಬಹುಶಃ ಇಷ್ಟೊಂದು ಪ್ರಮಾಣದ ಪ್ರತಿಭಟನೆ ನಿರೀಕ್ಷಿಸಿರಲಿಲ್ಲ.

ಇದುವರೆಗೂ ಆಂತರಿಕವಾಗಿ ನಡೆಯುತ್ತಿದ್ದ ಸಾಹಿತಿಗಳ ಗುದ್ದಾಟ ಈ ಘಟನೆಯ ಮೂಲಕ ತನ್ನ ಪರದೆ ಹರಿದು ಬಹಿರಂಗವಾಗಿ ಹೇಳಿಕೆ ಪ್ರತಿಹೇಳಿಕೆಗಳ ಮೂಲಕ ಬೀದಿಗೆ ಬಂತು. ಹಿರೇಮಠರ ಆಯ್ಕೆಯ ವಿರುದ್ಧ ತೀವ್ರವಾಗಿ ಪ್ರತಿಭಟಿಸಿದ ಹಲವು ಸಾಹಿತಿಗಳು ಕಡೆಗೆ ಹುಬ್ಬಳ್ಳಿಯಲ್ಲಿ ನಡೆಯುವ ಸಾಹಿತ್ಯ ಸಮ್ಮೇಳನಕ್ಕೆ ಪರ್ಯಾಯವಾಗಿ ಬೆಂಗಳೂರಿನಲ್ಲಿ ಮತ್ತೊಂದು ಸಮ್ಮೇಳನ ನಡೆಸಲು ನಿರ್ಧರಿಸಿದರು. "ಜಾಗೃತ ಸಾಹಿತ್ಯ ಸಮಾವೇಶ" ಬೆಂಗಳೂರಿನಲ್ಲಿ ನಡೆದುದರ ಹಿನ್ನೆಲೆ ಇದು. ಹುಬ್ಬಳ್ಳಿಯಲ್ಲಿ ಫೆಬ್ರವರಿ 16, 17, 18ರಂದು ಸಮ್ಮೇಳನ ನಡೆದ ದಿನಗಳಂದೇ ಬೆಂಗಳೂರಿನಲ್ಲಿ ಕನ್ನಡದ ಪ್ರಜ್ಞಾವಂತ ಸಾಹಿತಿಗಳು ಸೇರಿ "ಸಾಹಿತ್ಯದಲ್ಲಿ ಶ್ರೇಷ್ಠತೆಯೇ ಮುಖ್ಯ" ಎಂಬ ಘೋಷಣೆ ಜೊತೆಗೆ ಶ್ರೇಷ್ಠತೆಗಾಗಿ ಸಮಾವೇಶಗೊಂಡ ಈ ಅಪೂರ್ವ ಘಟನೆ ಸಾಹಿತ್ಯ ಚರಿತ್ರೆಯಲ್ಲಿ ಒಂದು ದಾಖಲೆ.

ಮೊದಲು ಪರ್ಯಾಯ ಸಮ್ಮೇಳನ ಎಂದು ನಂತರ "ಜಾಗೃತ ಸಾಹಿತ್ಯ ಸಮಾವೇಶ" ಎಂಬ ರೂಪು ತಳೆದು "ಸಾಹಿತ್ಯ ಪರಿಸರದಲ್ಲಿ ಶ್ರೇಷ್ಠತೆಯೇ ಮುಖ್ಯ" ಎಂಬ ಘೋಷ ವಾಕ್ಯದ ಅಡಿಯಲ್ಲಿ ನಡೆದ ಈ ಸಮಾವೇಶದ ವೈಶಿಷ್ಟ್ಯ; ಕನ್ನಡದ ಶ್ರೇಷ್ಠ, ಪ್ರಜ್ಞಾವಂತ ಸಾಹಿತಿಗಳೆಲ್ಲರೂ ತಮ್ಮ ವೈಯಕ್ತಿಕ ಮನಸ್ತಾಪಗಳನ್ನು ಬದಿಗಿಟ್ಟು ಶ್ರೇಷ್ಠತೆಯ ಹಂಬಲದಿಂದ ಒಂದು ಕಡೆ ಕೂಡಿದ್ದು ಹಾಗೂ ಈ ಸಾಹಿತ್ಯಿಕ ಪರಿಸರದಿಂದ ರಾಜಕೀಯ ಪುಡಾರಿಗಳನ್ನು ಸಂಪೂರ್ಣವಾಗಿ ಹೊರಗಿಟ್ಟಿದ್ದು.

ಸಮಾವೇಶ ಉದ್ಘಾಟನೆ ಮಾಡಿದ ಲಂಕೇಶರು ಕನ್ನಡದ ಬಗೆಗಿನ ಕಾಳಜಿ, ಕನ್ನಡ ಸಾಹಿತ್ಯದ ಈ ಸಮಾವೇಶದ ಹಿನ್ನೆಲೆಯನ್ನು ವ್ಯಕ್ತಪಡಿಸಿದರೆ ಅಧ್ಯಕ್ಷ ಅಡಿಗರು ಸಾಹಿತ್ಯದಲ್ಲಿ ಶ್ರೇಷ್ಠತೆ ನನ್ನ ಜೀವನ ಮರಣಗಳ ಪ್ರಶ್ನೆ ಎಂದು ಹೇಳಿ ಜೀವ ತುಂಬಿದರು. ಪುಸ್ತಕ ಬಿಡುಗಡೆ ಮಾಡಲು ಸಿದ್ಧಲಿಂಗಯ್ಯನವರನ್ನು ಆರಿಸಿದ್ದು ಎಲ್ಲಾ ಪ್ರಕಾರದ ಸಾಹಿತಿಗಳಿಗೆ ಸಮಾನ ಮನ್ನಣೆ ಇದೆ ಎಂಬುದನ್ನ ತೋರಿಸಿತು.

ಇದಕ್ಕೂ ಮುಂಚೆ ಮತಾಂಧತೆ ವಿರೋಧಿಸಿ ನಡೆದ ಮೆರವಣಿಗೆ ಈ ಸಮಾವೇಶಕ್ಕೆ ಅಗತ್ಯವಾಗಿದ್ದ ಆಕರ್ಷಣೆ ಒದಗಿಸಿತು ಮತ್ತು ಅರ್ಥ ಪೂರ್ಣವಾಗಿತ್ತು.

ಫೆಬ್ರವರಿ 17 ರಂದು ನಡೆದ ಎರಡು ವಿಚಾರ ಗೋಷ್ಠಿಗಳಲ್ಲಿ ಮೊದಲನೆಯದು "ಸಮಕಾಲೀನ ಬದುಕಿನ ಸವಾಲುಗಳು ಮತ್ತು ಸಾಹಿತ್ಯ" ಇದರಲ್ಲಿ ಅಂತಹ ಶ್ರೇಷ್ಠವಾದ ವಿಚಾರಗಳೇನೂ ಮಂಡಿತವಾಗದಿದ್ದರೂ ಅಧ್ಯಕ್ಷ ಯಶವಂತ ಚಿತ್ತಾಲರ ಭಾಷಣ ಅದಕ್ಕೆ ಅಪವಾದದಂತಿದ್ದು ಅವರ ಭಾಷಣದ ಪ್ರಭಾವ ದಟ್ಟವಾಗಿತ್ತು. ಆರ್ಥಿಕ ಸಿದ್ಧಾಂತದ ಪ್ರಜ್ಞೆ ಅವರ ವಿಚಾರಧಾರೆಯ ಒಂದು ಮುಖ್ಯ ಅಂಶ ಎಂಬುದು ಅವರ ಭಾಷಣದಲ್ಲಿ ಸ್ಪಷ್ಟವಾಗಿತ್ತು.

ಎರಡನೆಯ ವಿಚಾರ ಗೋಷ್ಠಿಯಲ್ಲಿನ ವಿಷಯ "ಸಾಹಿತ್ಯದಲ್ಲಿ ವಿವಿಧ ಸಾಮಾಜಿಕ ಅನುಭವದ ಲೋಕಗಳು ಮತ್ತು ಕಲೆಯ ಆಕೃತಿ" ಈ ಗೋಷ್ಠಿಯಲ್ಲಿ ಹಲವು ಮುಖ್ಯ ವಿಚಾರಗಳು ಮಂಡಿತವಾದವು ಮುಖ್ಯವಾಗಿ ಬೋಳುವಾರು ಮಹಮದ್ ಕುಂಞ ಅವರ ಮಾತುಗಳು, ವಿಚಾರಗಳು ಎಲ್ಲರನ್ನೂ ತೀವ್ರವಾಗಿ ಮುಟ್ಟಿ ಅವರ ಚಿಂತನೆಗಳಿಗೆ ಗ್ರಾಸ ಒದಗಿಸಿತು. ಮುಸ್ಲಿಮರ ಸಮಸ್ಯೆಗಳು. ಅವರ ಸಾಮಾಜಿಕ ಅನಿವಾರ್ಯತೆಗಳು. ಅವರ ಬದುಕಿನ ಸವಾಲುಗಳು ಬಹಳ ಪರಿಣಾಮ ಕಾರಿಯಾಗಿ ಮಂಡಿಸಿದರು. ಅಧ್ಯಕ್ಷರಾಗಿದ್ದ ಕಂಬಾರರ ಭಾಷಣವೂ ಸಹಾ ಹುಟ್ಟಿದ ಪರಿಸರ ಲೇಖಕನ ವಿಚಾರಧಾರೆಯನ್ನು ಬರವಣಿಗೆಯನ್ನು ರೂಪಿಸುವ ಬಗೆಯನ್ನು ಲಘುಧಾಟಿಯಲ್ಲಿದ್ದರೂ ಪರಿಣಾಮಕಾರಿಯಾಗಿ ಮೂಡಿ ಬಂತು.

18ರಂದು "ಸಾಹಿತ್ಯದಲ್ಲಿ ಶ್ರೇಷ್ಠತೆಯ ಆದರ್ಶ" ವಿಷಯದ ಬಗ್ಗೆ ನಡೆದ ಮುಕ್ತ ಅಧಿವೇಶನದಲ್ಲಿ ಚುರುಕಿನ ಪ್ರತಿಕ್ರಿಯೆ ಮೂಡಿತ್ತು. ಕೆ. ವಿ. ಸುಬ್ಬಣ್ಣನವರು ಶ್ರೇಷ್ಠತೆಯ ಬಗ್ಗೆ ಬಹಳ ಖಾರವಾಗಿ ಮಾತನಾಡಿದರೆ ಲಕ್ಷ್ಮೀಶ ತೊಳ್ಪಾಡಿಯವರ ಭಿನ್ನ ಶೈಲಿಯ ವಿಚಾರ ಗಮನ ಸೆಳೆಯಿತು. ಅಧ್ಯಕ್ಷೆಯಾಗಿದ್ದ ಶ್ರೀಮತಿ ಅನುಪಮ ನಿರಂಜನರ ಅಧ್ಯಕ್ಷ ಭಾಷಣಕ್ಕೆ ಬದಲಾಗಿ ಸ್ತ್ರೀಯರ ಸಮಾನತೆ, ಸ್ತ್ರೀಯರ ಸಾಹಿತ್ಯದ ಸ್ಥಾನಗಳ ಬಗ್ಗೆ ಭಾಷಣ ಬಿಗಿದದ್ದು ಅನುಚಿತವಾಗಿತ್ತು. ಈ ಅವಕಾಶ ಬಿಟ್ಟರೆ ಮತ್ತಿಲ್ಲ ಎಂಬ ಧೋರಣೆ ಇರಬಹುದೇನೋ,

ಮೂರನೇ ವಿಚಾರಗೋಷ್ಠಿ "ಸಾಂಸ್ಕೃತಿಕ ಪರಿಸರ ಮತ್ತು ಉತ್ಕೃಷ್ಟತೆಯ ರಕ್ಷಣೆ" ಎಂಬ ವಿಚಾರ ಹೊಂದಿದ್ದು ಕಾಳೇಗೌಡ ನಾಗವಾರರ ಅಧ್ಯಕ್ಷತೆಯಲ್ಲಿ ನಡೆಯಿತು. ಪುಂಡಲೀಕ್ ಶೇಟ್‌ರ ಚುರುಕಾದ ಭಾಷಣ ಆಕರ್ಷಿಸಿದರೆ ಟಿ. ಸು. ಕೃಷ್ಣಶೆಟ್ಟಿಯವರ ಚಿತ್ರಕಲೆಯನ್ನು ಕುರಿತ ವಿಚಾರದ ಮೇಲೆ ಸಾಕಷ್ಟು ಚರ್ಚೆ ಆಯಿತು.

ಇನ್ನು ಎರಡೂ ದಿನ ನಡೆದ ಕವಿಗಳ ಕಾವ್ಯ ಪ್ರಸ್ಥಾನದಲ್ಲಿ ಎರಡೂ ದಿನ ರಾಮಚಂದ್ರ ಶರ್ಮ ಅವರೇ ಅಧ್ಯಕ್ಷರಾಗಿದ್ದು ವಿಶೇಷ. ಶರ್ಮರ ಕಾವ್ಯ ಪ್ರತಿಭೆಗೆ

ಸಂದ ಗೌರವ ಸಹಾ. ಆದರೆ ಎರಡೂ ದಿನವೂ ಅಂತಹ ಶ್ರೇಷ್ಠ ಎನಿಸುವ ಕವನವನ್ನು ಯಾರೂ ಓದಲಿಲ್ಲ ಎಂಬುದು ಬೇರೆ ವಿಷಯ. ಆದರೂ ಸಮಾವೇಶದ ಪ್ರಧಾನ ಆಕರ್ಷಣೆ ಕಾವ್ಯಪ್ರಸ್ತಾನವೇ ಆಗಿತ್ತು. ಹಾಗೇ ಅಷ್ಟೇ ಆಕರ್ಷಕವಾಗಿದ್ದದ್ದು ರಾಮಚಂದ್ರ ಶರ್ಮ ಅವರ ಭಾಷಣ.

ಸಮಾರೋಪದ ಭಾಷಣ ಮಾಡಿದ ಅನಂತಮೂರ್ತಿಯವರು ಇತಿಹಾಸ ಮರಳಿ ಮತ್ತೆ ಧರ್ಮದ ಬಗ್ಗೆ ಸಾಹಿತಿಗಳ ಚಿಂತನೆ ಹರಿಯಬೇಕು ಎಂದು ಹೇಳಿದ್ದಲ್ಲದೆ ಮಕ್ಕಳಿಗೆ ಕನ್ನಡದ ಸಾಹಿತ್ಯದ ಪರಿಚಯ ಆಗಬೇಕೆಂದರೆ ಕನಿಷ್ಠ ಪಕ್ಷ ಹೈಸ್ಕೂಲ್ ವರೆಗಾದರೂ ಕನ್ನಡ ಕಲಿಸಲೇ ಬೇಕು ಎಂದರು. ಡಿ. ಆರ್. ನಾಗರಾಜ್ ಅವರು ಮತ್ತೊಮ್ಮೆ ಸಮಾವೇಶದ ಬಗ್ಗೆ ಸ್ಪಷ್ಟವಾದ ಮಾಹಿತಿ ಹಾಗೂ ಅದು ರೂಪುಗೊಂಡ ಬಗ್ಗೆ ವಿವರವಾದ ಭಾಷಣ ಮಾಡಿದರು. ತೇಜಸ್ವಿಯವರು ಮಾತನಾಡದೆ ಹಿಂತಿರುಗಿದರೆ ಅಧ್ಯಕ್ಷ ಶಾಂತಿನಾಥ ದೇಸಾಯಿ ಶ್ರೇಷ್ಠತೆಯ ಬಗ್ಗೆ ತಮ್ಮ ವಿಚಾರವನ್ನು ಸಮಾವೇಶದ ಕೊನೆಯ ಭಾಷಣದಲ್ಲಿ ವಿವರಿಸಿದರು. ಮತ್ತೊಮ್ಮೆ ಮಾತನಾಡಿದ ಲಂಕೇಶರು ಸೇರಿದ್ದ ಅಪಾರ ಜನಸ್ತೋಮ ನೋಡಿ ಇಂತಹ ಬೆಂಬಲ ದೊರೆತರೆ ವರ್ಷಕ್ಕೆ ಎರಡು ಬಾರಿ ಇಂತಹ ಸಮಾವೇಶ ಮಾಡುವುದಾಗಿ ಹೇಳಿದರು.

ಸಾಹಿತ್ಯದಲ್ಲಿ ಶ್ರೇಷ್ಠತೆಯೇ ಮುಖ್ಯ ಎಂದು ಇಷ್ಟೆಲ್ಲಾ ಮಾಡಿದ ಸಾಹಿತಿಗಳಿಗೆ ಎದುರಾಗಿದ್ದು ಶ್ರೇಷ್ಠತೆಯ ಮಾನದಂಡ ಯಾವುದು ? ಎಂಬ ಪ್ರಶ್ನೆ. ಶ್ರೇಷ್ಠತೆ ಯನ್ನು ನಿರ್ಧರಿಸುವವರು ಯಾರು ? ಅದನ್ನು ಅಳೆಯುವ ಮಾನದಂಡಗಳು ಯಾವುವು ? ಯಾವುದು ಶ್ರೇಷ್ಠ ? ಯಾವುದು ಕನಿಷ್ಠ ? ಹೀಗೆ ಸಾಲು ಸಾಲಾಗಿ ಚರ್ಚಿತವಾದ "ಶ್ರೇಷ್ಠತೆ"ಯ ಬಗ್ಗೆ ಅಲ್ಲಿ ಸೇರಿದ್ದ ಸಾಹಿತಿಗಳಿಗೆ, ವಿಮರ್ಶಕರಿಗೆ "ಇದಮಿತ್ಥಂ" ಎಂದು ಖಚಿತವಾಗಿ ಉತ್ತರ ಹೊಳೆಯದಿದ್ದರೂ ಈ ವಿಚಾರ ಮಂಡನೆ ಚರ್ಚೆಗಳು ಒಂದು ನಿರ್ಧಾರಕ್ಕೆ ಬರಲು ಸಹಾಯವಾಗಬಹುದು.

ಏನೇ ಆದರೂ "ಜಾಗೃತ ಸಾಹಿತ್ಯ ಸಮಾವೇಶ" ಯಶಸ್ವಿಯಾಗಿ ನಡೆದದ್ದು ಒಂದು ಗಮನೀಯ ಅಂಶ. ಅಲ್ಲಿ ಸೇರಿದ್ದ ಜನರನ್ನು ಕಂಡು ಶ್ರೇಷ್ಠತೆ ಬಯಸು ವವರ ಸಂಖ್ಯೆ ಸಾಕಷ್ಟಿದೆ ಎಂದು ಖಚಿತವಾಯಿತು. ಬಹುಶಃ ಸಂಘಟಕರೂ ಇಷ್ಟೊಂದು ಜನರನ್ನು ನಿರೀಕ್ಷಿಸಿರಲಿಲ್ಲ ಎನಿಸುತ್ತದೆ.

ಒಟ್ಟಾರೆ ಹೇಳಬಹುದಾದರೆ ಕನ್ನಡ ಸಾಹಿತ್ಯ ಸಾಂಸ್ಕೃತಿಕ ವಲಯಗಳಲ್ಲಿನ ಒಂದು ಹೊಸಾ ಎಚ್ಚರಕ್ಕೆ ಕಾರಣವಾದ ಈ ಸಮಾವೇಶ, ಈ ಎಚ್ಚರವನ್ನ ಯಾವ ರೀತಿ ಕಾಯ್ದುಕೊಳ್ಳುತ್ತದೆ ಎನ್ನುವುದು ಪ್ರಮುಖವಾದ ಅಂಶ. ಇದೊಂದು ಹೊಸ ಅಲೆಗೆ ಹೃದಯ ಸಂವಾದದ ಜೊತೆ ನಿಜವಾದ ಸಾಹಿತ್ಯವನ್ನ ಹುಡುಕುವ ಚಳುವಳಿಯಾಗಬಹುದೆ ?

ದೃಷ್ಟಿ :

# ಕಾವ್ಯದ ವೈಶಿಷ್ಟ್ಯಗಳು

ಡಾ|| ಕೆ. ವಿ. ನಾರಾಯಣ್

ಕಾವ್ಯದ ಎಲ್ಲ ವೈಶಿಷ್ಟ್ಯಗಳನ್ನೂ ಹೇಳಲು ಅಸಾಧ್ಯ, ಕೆಲವು ಪ್ರವೇಶಾತ್ಮಕ ವಿಷಯಗಳನ್ನು ಇಲ್ಲಿ ಹೇಳಲು ಪ್ರಯತ್ನಿಸುವೆ ; ಕಾವ್ಯ ಒಂದು ದೊಡ್ಡ ಸಂಸ್ಥೆಯಂತೆ. ಇದರಲ್ಲಿ ಯಾವ ಭಾಗವನ್ನು ಕುರಿತು ಮಾತನಾಡಬೇಕು ಎನ್ನುವುದೂ ಸಮಸ್ಯೆ, ಕಾರಣ ಕಾವ್ಯದ ದೀರ್ಘವಾದ ಮತ್ತು ವಿಶಾಲವಾದ ವ್ಯಾಪ್ತಿ.

ಮೇಲೆ ಹೇಳಿದಂತೆ ಕಾವ್ಯ ಒಂದು ಸಂಸ್ಥೆಯಂತಾದ್ದರಿಂದ ಅದರ ವ್ಯಾಪ್ತಿಯಲ್ಲಿ ಬರುವ ಎಲ್ಲ ಸಂಗತಿಗಳನ್ನೋ ಅಥವಾ ಕವಿತೆಯ ಶ್ರೇಷ್ಠ ಎನ್ನಿಸುವ ಅಂಶಗಳೋ ಎನ್ನುವುದು ಪ್ರಶ್ನೆಯಾಗುತ್ತೆ. ಉದಾ : ಬೆಳಕು ಬಿಳಿಯಾದರೆ ಅದು ಹಲವು ಬಣ್ಣಗಳಿಂದ ಕೂಡಿದ್ದು. ಆದರೆ ಅದರ ಕ್ರಿಯೆಯ ಬಗ್ಗೆಯೋ ಅಥವಾ ಅದರ ಅಂತರಂಗದಲ್ಲಿ ಅಡಕವಾಗಿರುವ ವೈಶಿಷ್ಟ್ಯ, ವೈವಿಧ್ಯ, ವ್ಯತ್ಯಾಸಗಳ ಬಗ್ಗೆ ಮಾತನಾಡುತ್ತವೆಯೋ ಎನ್ನುವುದು ಮುಖ್ಯ.

ಇಲ್ಲಿ ಬರೀ ಮೇಲುನೋಟದ ಪ್ರವೇಶಾತ್ಮಕ ವಿಶ್ಲೇಷಣೆಗೆ ನನ್ನನ್ನು ನಾನು ಸೀಮಿತಗೊಳಿಸಿಕೊಳ್ಳುವೆ, ಕಾವ್ಯ ಅಥವಾ ಕವಿತೆ ಎಂದರೆ ನಮಗೆದುರಾಗುವ ಪ್ರಶ್ನೆ ಹಾಗೆಂದರೇನು ? ಎನ್ನುವುದು.

ಕವಿತೆ ಎಂದರೆ ರಚನೆಯ ಮೇಲುನೋಟಕ್ಕೆ ಕೆಲವು ತೋರಿಕೆಯ ಲಕ್ಷಣಗಳನ್ನ ಹೊಂದಿ, ಅಂದರೆ ವಿನ್ಯಾಸದಲ್ಲಿ, ಗಾತ್ರದಲ್ಲಿ, ಛಂದೋಬದ್ಧವಾಗಿ ಗೇಯತೆ ಹೊಂದಿದ್ದರೆ, ಭಾಷೆಯ ಬಳಕೆಯನ್ನ ಹಾಗೂ ಲಯ ಇವುಗಳನ್ನ ನೋಡಿ ಕವಿತೆ ಎನ್ನುತ್ತಾರೆ. ಗದ್ಯಕ್ಕಿಂತ ವಿಶಿಷ್ಟವಾಗಿ ಭಾಷೆ ಬಳಕೆಯಾಗುವ ರೀತಿಯಿಂದ ಬೇರೆಯಾಗಿ ಕಾಣುವ ಹೊರ ವಿನ್ಯಾಸದಿಂದ ಕವಿತೆಯನ್ನ ಗುರುತಿಸಬಹುದು. ಆದರೆ ಇದು ಯಾವುದೂ ಕವಿತೆಯನ್ನು ಅರ್ಥೈಸಲಾರವು.

ಹಾಗಾದರೆ ಕವಿತೆಯ ಯಥಾರ್ಥವಾದ ಲಕ್ಷಣಗಳನ್ನು ಕಾಣಲು ಪ್ರಯತ್ನಿಸೋಣ. ಯಾವ ಲಕ್ಷಣಗಳಿಂದ ಕವಿತೆ ಓದುಗರನ್ನ ಸೆಳೆಯುತ್ತದೆ ? ಇದರ ಸಾರ

(Essence) ಯಾವುದು ? ಮತ್ತು ಉಳಿದ ಪ್ರಕಾರಗಳಿಂತ ಇದು ಹೇಗೆ ಭಿನ್ನ ಎಂದು ತಿಳಿಯುವ.

ಮೂಲತಃ ಕವಿತೆ ಒಂದು ರಚನೆ, ಒಂದು ವ್ಯವಸ್ಥೆ ಹಾಗೂ ಪರಿಕರಗಳನ್ನ ಅದು ಒಳಗೊಂಡಿರುತ್ತದೆ. ಈ ಪರಿಕರ ಮೂಲಭೂತವಾಗಿ ಭಾಷೆಯಾಗುತ್ತದೆ. ರಚನೆ ಹಲವಾರು ಬಗೆಯಲ್ಲಿ ಆಗುತ್ತದೆ. ಅದರಲ್ಲಿ ಏಕಮುಖ ರಚನೆ ಹಾಗೂ ವೃತ್ತಿಯ ರಚನೆ, ಈ ಎರಡೂ ಬಗೆಯದ್ದಲ್ಲ ಕವಿತೆ. ಮೇಲೆ ಹೇಳಿದಂತೆ ಕವಿತೆ ಮೂಲತಃ ರಚನೆ ಹಾಗೂ ವ್ಯವಸ್ಥೆ. ಅದಕ್ಕೆ ಬಳಸಿರುವ ಪರಿಕರ ಭಾಷೆಯನ್ನೇ ಒಳಗೊಂಡು ಅದು ಏಕಕಾಲಕ್ಕೇ ಅನೇಕ ಸಂಗತಿಗಳನ್ನು ಒಳಗೊಂಡಿರುತ್ತದೆ.

ಇದನ್ನ ಒಂದು ಪ್ರವಚನಕ್ಕೆ ಹೋಲಿಸಬಹುದು (Discussion) ವ್ಯವಸ್ಥೆಯ ಬಗ್ಗೆ ಹೇಳುವಾಗ ಇದು ನಾಲ್ಕು ಆಯಾಮಗಳನ್ನ ಹೊಂದಿರುತ್ತದೆ. ಅದು ಹೇಳುವ ಕವಿಗೂ, ಕೇಳುವವನಿಗೂ ಇರುವ ಸಂಬಂಧ, ಹೇಳುವ ವಿಚಾರ, ಪರಿಸರ (Context) ಹಾಗೂ ಕಾಲ ದೇಶಗಳು. ಇಲ್ಲಿ ಕವಿಗೂ ಕೇಳುವವನಿಗೂ ಒಂದು ವಿಶಿಷ್ಟ ಸಂಬಂಧವೇರ್ಪಡುತ್ತದೆ. ಇದು ಬರೀ ಬೌದ್ಧಿಕವಲ್ಲ. ಅನುಭವದ ಐಂದ್ರಿಕ ಮಾನಸಿಕ ಯಾವುದು ಬೇಕಾದರೂ ಆಗಬಹುದು. ಕವಿಯ ಯಾವ ಅನುಭವವೂ ಶಾಬ್ದಿಕವಾದುದಲ್ಲ, ಇದನ್ನ ವ್ಯಕ್ತಪಡಿಸುವಾಗ ಕವಿ ಶಾಬ್ದಿಕವಾಗಿ ವ್ಯಕ್ತಪಡಿಸುತ್ತಾನೆ. ಕೇಳುಗನಲ್ಲಿ ಅನುಭವವನ್ನು ಪುನರ್ ನಿರ್ಮಿಸುವುದರಲ್ಲಿ ಪರಿಣಾಮವನ್ನುಂಟುಮಾಡುತ್ತಾನೋ ಅವನು ನಿಜವಾದ ಕವಿ.

ಕವಿತೆ ಕೂಡಾ ಒಂದು ವ್ಯವಸ್ಥೆಯಾದ ಕಾರಣ, ಅದಕ್ಕೆ ಹೊರಪರಿಸರ ಇರುವುದಿಲ್ಲ (outer Context) ಕವಿತೆಯಲ್ಲೇ ಪರಿಸರ ನಿರ್ಮಾಣವಾಗಿರುತ್ತೆ. ಯಾವುದೇ ಕವಿತೆಯನ್ನ ನಾವು ಹತ್ತನೇ ಸಾಲಿನಿಂದ ಓದಲು ಸಾಧ್ಯವಿಲ್ಲ. ಅಂದರೆ ಒಂದು ಕವಿತೆಯನ್ನ ಓದುವಾಗ ಕ್ರಮಬದ್ಧತೆ ಇರುತ್ತದೆ. ಆದರೆ ಅದರ ಸಂವಹನದಲ್ಲಿ ಈ ಕ್ರಮಬದ್ಧತೆ ಇರುವುದಿಲ್ಲ.

ಕವಿಯಲ್ಲಿ ಅನುಭವ ಪುನರ್ ನಿರ್ಮಾಣವಾಗುವುದಕ್ಕೂ ವ್ಯಕ್ತಿ–ವ್ಯಕ್ತಿಯಲ್ಲಿ ಆಗುವುದಕ್ಕೂ ಬಹಳ ವ್ಯತ್ಯಾಸವಿದೆ. ಕವಿ ಅನುಭವವನ್ನು ಮತ್ತೆ ನಿರ್ಮಿಸುವಾಗ ಅನುಭವ ಮತ್ತು ಅದರ ಪರಿಣಾಮ ಎರಡನ್ನೂ ಬೆರೆಸಿ ಕವಿತೆಯಲ್ಲಿ ಮುಂದಿಡುತ್ತಾನೆ. ಈ ಅನುಭವಗಳಿಗೆ ಕಾಲ ದೇಶ ಇವುಗಳ ಬದ್ಧತೆ ಇರುತ್ತದೆ. ಬೇಂದ್ರೆ ಕುವೆಂಪುರವರ ಕವನಗಳು ಇಂದಿಗೂ ಓದುತ್ತೇವೆ. ಕಾರಣ ಅದರ ಪರಿಣಾಮ. ಕವಿತೆಗೆ ಪರಿಸರ ಬೇಕಿಲ್ಲ. ಅದು ಕಾಲ ದೇಶ ಇವುಗಳಿಂದ ಮುಕ್ತ.

ಅನುಭವ ಕಾಲ, ದೇಶಮಾನಗಳ ಬದ್ಧತೆಯನ್ನು ಒಡೆಯುವುದರಿಂದ ಇಂದಿಗೂ ಎಲ್ಲ ಕವಿತೆಗಳನ್ನ ಓದಲು ಸಾಧ್ಯ. ಯಾವುದು ಈ ಬದ್ಧತೆಯನ್ನು ಒಡೆಯಲು ಅಸಾಧ್ಯವೋ ಅದು ಕವಿತೆಯಾಗಲು ಅಸಮರ್ಥವಾಗುತ್ತದೆ. ಕವಿತೆಯಲ್ಲಿ ಅನುಭವದ

ಪ್ರಕ್ರಿಯೆ, ಪ್ರತಿಕೃತಿ ಮುಂತಾದುವನ್ನ ಏಕಕಾಲದಲ್ಲಿ ತಂದುಕೊಡುವಂತೆ ಇರಬೇಕು. ಭಾಷಿಕವಾಗಿ ಅದು ಆಗಿಹೋದ ಸಂಗತಿಯಲ್ಲ ಆಗುತ್ತಿರುವ ಸಂಗತಿ. ಕವಿತೆ ಕವಿ ಓದುವಾಗ ಆಗುತ್ತದೆ. ಇದು ಅನುಭವದ ಮರುಸೃಷ್ಟಿ. ಈ ಸೃಷ್ಟಿಗೆ ಬೇಕಾದ ಸಾಮಗ್ರಿ ಮಾತ್ರ ಕವಿತೆ. ಈ ಪ್ರಕ್ರಿಯೆಗೆ ಕವಿತೆ ನಮಗೊದಗಿಸುವುದು ಬರೀ ಚೋದಕಗಳನ್ನು ಮಾತ್ರ ಅದು ಉತ್ತೇಜಿಸುತ್ತದೆ (stimulates) ಶ್ರೇಷ್ಠ ಉತ್ತಮ ಕವಿತೆಗಳು. ಸದಾ ಕಾಲ ಜಾರಿಯಲ್ಲಿರುತ್ತದೆ ಹಾಗೂ ವಿವಾದಕ್ಕೊಳಗಾಗು ವುದು ಇದರಿಂದಲೇ.

ಕವಿತೆಗೆ ಪರ್ಯಾಯ ಇಲ್ಲ. ಅದು ನಮ್ಮಲ್ಲಿ ಆಗಬೇಕು. ಕವಿತೆಗೆ ಅರ್ಥವ್ಯಾಖ್ಯಾನ ಏನೂ ಇಲ್ಲ. ಇದು ಸಜಾಗರೂಕತೆಯ ಸ್ಥಿತಿ. ಇದು ನಮ್ಮಲ್ಲಿಯೇ ಆಗಬೇಕು. ವ್ಯವಸ್ಥೆಯೇ ಒಂದು ಕ್ರಿಯೆ. ಪ್ರತಿಯೊಬ್ಬರೂ ಅದರೊಳಗೂ ಹೊರಗೂ ಇರುವ ಹಾಗೆ ಕವಿತೆಗೂ ಇರುತ್ತದೆ. ಈ ವ್ಯವಸ್ಥೆ ಬೆಳೆಯುತ್ತಾ ಭಿನ್ನ ಅರ್ಥಗಳನ್ನ ಕೊಡದೇ ಹೋದರೆ ಕಾಲಾನುಕಾಲಕ್ಕೆ ಅದನ್ನು ಅರ್ಥೈಸಿಕೊಳ್ಳಲು ಆಗುವುದಿಲ್ಲ ವ್ಯವಸ್ಥೆ ಜೀವಂತವಾಗಿದ್ದರೆ ಕವಿತೆ ಮಿಡಿದು ತುಡಿಯುವುದು ಇಲ್ಲವಾದರೆ ಇದನ್ನು ಅರ್ಥೈಸಲು ಆಗುವುದಿಲ್ಲ.

ಇತರ ಕಲೆಗಳಿಗಿಂತಾ ಕವಿತೆ ಹೇಗೆ ಭಿನ್ನ ಎನ್ನುವುದು ಯೋಚಿಸಿದಾಗ, ಮೂಲತಃ ಚಿತ್ರ, ಶಿಲ್ಪ, ಸಂಗೀತ ಹಾಗು ನೃತ್ಯಕಲೆಗಳನ್ನು ಗಮನದಲ್ಲಿರಿಸಿಕೊಂಡು ಯೋಚಿಸಿದಾಗ ಇವೆಲ್ಲದಕ್ಕೂ ಒಂದು ನಿರ್ದಿಷ್ಟ ಮಾಧ್ಯಮಗಳಿವೆ. ವರ್ಣ, ಮನನ ಶೀಲ ಘನವಸ್ತು, ನಾದ, ಲಯ ಮತ್ತು ಆಂಗೀಕ ಇವು ಕ್ರಮವಾಗಿ ಮಾಧ್ಯಮಗಳಾಗು ತ್ತವೆ. ಇಲ್ಲಿ ಚಿತ್ರಕಲೆ ನೃತ್ಯ ಸಂಗೀತಗಳ ಮಾಧ್ಯಮಗಳು ಪ್ರಾಥಮಿಕವಾಗಿರುತ್ತದೆ. ಆದರೆ ಕವಿತೆ ಇವೆಲ್ಲದಕ್ಕೂ ಹೊರತಾದ್ದು. ಹಾಗೇ ಕವಿತೆಗೆ ಭಾಷೆ ಮಾಧ್ಯಮ. ಈ ಮಾಧ್ಯಮಗಳನ್ನ ಬಳಸುವ ಕ್ರಮಕ್ಕೂ ಕವಿತೆಯ ಮಾಧ್ಯಮ ಬಳಸುವುದಕ್ಕೂ ಮೂಲತಃ ವ್ಯತ್ಯಾಸವಿರುತ್ತವೆ. ಕವಿತೆಯಲ್ಲಿ ಬಳಸುವ ಮಾಧ್ಯಮವಾದ ಭಾಷೆಗೆ ಪ್ರಧಾನವಾದ ವಾಚ್ಯಾರ್ಥ ಇದ್ದೇ ಇರುತ್ತದೆ. ಇದನ್ನ ಗ್ರಹಿಸಲೇಬೇಕು. ಹಾಗೇ ಕವಿತೆ ವಾಚ್ಯಾರ್ಥಕ್ಕಷ್ಟೇ ಸೀಮಿತವಲ್ಲ. ಇದನ್ನ ಮೀರಿ ಅರ್ಥೈಸಿಕೊಳ್ಳುತ್ತೇವೆ. ವಾಚ್ಯಾರ್ಥದ ಗ್ರಹಿಸುವಿಕೆ ಹಾಗೂ ಬಿಡುವಿಕೆ ನಮ್ಮನ್ನ ಬೇರೊಂದು ರೀತಿಯಲ್ಲಿ ಅರ್ಥೈಸಿಕೊಳ್ಳುವುದಕ್ಕೆ ಅನುವುಮಾಡಿಕೊಡುತ್ತದೆ. ಇವೆರಡರಲ್ಲಿ ಗತಿ (ತರ್ಕ) ಕೆಲಸ ಮಾಡುತ್ತದೆ. ಕವಿತೆಯಲ್ಲಿ ಅರ್ಥವನ್ನು ಹುಡುಕುವುದು ವ್ಯರ್ಥ, ಕವಿತೆಗೆ ವ್ಯಾಖ್ಯಾನ ಸಾಧ್ಯ ಪ್ರತಿಯೊಂದು ಕವಿತೆ ಹೊಸದೂ ಹೌದು, ಹಳೆಯದೂ ಹೌದು.

(ದಿನಾಂಕ 10-6-88 ರಂದು 'ಸಂಚಯ'ದ ಕಾವ್ಯ ಕಮ್ಮಟದಲ್ಲಿ ಮಾಡಿದ ಮಾಡಿದ ಭಾಷಣದ ವರದಿ)

# ತೀ. ನಂ. ಶ್ರೀ. ಅವರ 'ಕಾವ್ಯಮೀಮಾಂಸೆ'

ರಾಜೀವಸಖ

ಹೊಸಗನ್ನಡ ಉದಯದಲ್ಲಿ ಕನ್ನಡಕ್ಕಾಗಿ ಕೆಲಸಮಾಡಿದ ಟಿ. ಎಸ್. ವೆಂಕಣ್ಣಯ್ಯ ಬಿ.ಎಂ.ಶ್ರೀ., ಮುಂತಾದವರು ಬರೆದದ್ದು ತುಂಬಾ ಕಡಿಮೆಯೇ. ಆದರೆ ಅವರ ವಿದ್ವತ್ತು, ವಿವೇಚನಾ ಶಕ್ತಿ, ಕನ್ನಡವನ್ನು ಬೆಳೆಸುವಲ್ಲಿ ಅವರು ಮಾಡಿದ ಕೆಲಸ ಎಲ್ಲರೂ ಮೆಚ್ಚುವಂತಹದು. ಮಾಸ್ತಿ, ಡಿ.ವಿ.ಜಿ. ಮುಂತಾದವರನ್ನು 'ಸಾಹಿತ್ಯ ಗರಡಿ'ಯಲ್ಲಿ ಪಳಗಿಸುವಲ್ಲಿ ಮಾಡಿದ ಕೆಲಸವೂ ಅಷ್ಟೇ ಸ್ತುತ್ಯಾರ್ಹವಾದುದು.

ತೀ.ನಂ.ಶ್ರೀಕಂಠಯ್ಯ ಜನಿಸಿದ್ದು ನವೆಂಬರ್ 26, 1906 ರಂದು. ಮುಂದೆ ಆದರ್ಶ ಅಧ್ಯಾಪಕರಾಗಿ, ಭಾಷಾ ವಿಜ್ಞಾನದ ಅಧ್ಯಯನಕ್ಕೆ ಅಡಿಪಾಯ ಹಾಕಿದವರಾಗಿ ಕೆಲಸ ಮಾಡಿದ್ದಾರೆ. 1932ರಲ್ಲಿ ಪ್ರಕಟವಾದ 'ಒಲುಮೆ' ಕನ್ನಡ ಸಾಹಿತ್ಯದಲ್ಲಿನ ಮೊದಲನೇ ಪ್ರೇಮಗೀತೆಗಳ ಸಂಕಲನ, 'ನಂಬಿಯಣ್ಣನ ರಗಳೆ ಮತ್ತು 'ಗದಾಯುದ್ಧ ಸಂಗ್ರಹ' ಇತರ ಅತ್ಯುತ್ತಮ ಗ್ರಂಥ ಸಂಪಾದನೆಯಾದರೆ, 'ನಂಟರು' ಲಲಿತ ಪ್ರಬಂಧಗಳ ಸಂಕಲನ 'ಕಾವ್ಯ ಸಮೀಕ್ಷೆ' ಹಾಗು 'ಸಮಾಲೋಕನ' ಕಾವ್ಯಾನುಭವ ಇವು ಸಂಶೋಧನೆ ಹಾಗು ವಿಮರ್ಶಾ ಲೇಖನಗಳ ಸಂಕಲನ.

'ಭಾರತೀಯ ಕಾವ್ಯ ಮೀಮಾಂಸೆ' ಕನ್ನಡದ ಮೇರು ಕೃತಿ. ಹಾಗೆಯೇ ಶ್ರೀಕಂಠಯ್ಯನವರ ವಿದ್ವತ್ತು, ಪ್ರತಿಭೆಗೆ ಹಿಡಿದ ಕೈಗನ್ನಡಿ. 1953ರಲ್ಲಿ ಮೊದಲ ಬಾರಿಗೆ ಪ್ರಕಟಣೆಗೊಂಡ ಈ ಕೃತಿ, ರಸ-ಧ್ವನಿ-ಔಚಿತ್ಯ ಎಂಬ ತಿರುಳಿನಿಂದ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಹೊಸ ದಿಗಂತವನ್ನೇ ತರೆಯಿತು. ಈ ಕೃತಿಯಲ್ಲಿ ಮೂರು ಭಾಗಗಳಿದ್ದು ಮೊದಲನೆಯದರಲ್ಲಿ ಶಾಸ್ತ್ರ ಬೆಳವಣಿಗೆಯನ್ನೂ, ಎರಡನೆಯದರಲ್ಲಿ ಕವಿ-ಕಾವ್ಯ-ಸಹೃದಯರನ್ನ ಮೂರನೆಯದರಲ್ಲಿ ರಸ-ಧ್ವನಿಗಳ ವಿವೇಚನೆ ಮಾಡಿದ್ದಾರೆ.

ಶಾಸ್ತ್ರ ಕಾವ್ಯಗಳ ಗುರಿಯ ಬಗ್ಗೆ ಒಂದೆಡೆ "ಶಾಸ್ತ್ರದ ಉದ್ದೇಶವು ತತ್ವ ಪ್ರತಿಪಾದನೆ. ಇದು ಸತ್ಯ. ಇದು ಅಸತ್ಯ ಎಂದು ಒರೆಹಚ್ಚಿ ನೋಡುವುದೇ ಇದರ ಕಾರ್ಯ. ಪ್ರಮಾಣಗಳನ್ನು ಹೆಜ್ಜೆಹೆಜ್ಜೆಗೂ ಅವಲಂಬಿಸಬೇಕು. ಹೀಗೆ ಶಾಸ್ತ್ರದಿಂದ ತಿಳಿಯುವ ವಿಷಯವು ಸರಿಯೆನಿಸಬೇಕಾದರೆ ತನ್ನಿಂದ ಹೊರಗಿರುವ ಪ್ರಮಾಣಗಳ ಪರೀಕ್ಷೆಗೆ ಒಳಪಡಿಸಬೇಕು. ಆದರೆ, ಇಲ್ಲಿ ಕಾವ್ಯದ ಬಗೆಯೇ ಬೇರೆ. ಕಾವ್ಯದ ಗುರಿ ರಸಾನುಭವ. ಅನುಭವಕ್ಕೆ ಅನುಭವವೊಂದೇ ಪ್ರಮಾಣ. ತನಗೆ ಅದು ದೊರೆತರೆ

ಉಂಟು, ಇಲ್ಲವಾದರೆ ಇಲ್ಲ. ಅನುಭವ ಪಡೆದವನ ಮುಂದೆ ಬೇರೊಬ್ಬರು ಬಂದು ಅದು ಇಲ್ಲವೆಂದು ಎಷ್ಟು ಯುಕ್ತಿಯುಕ್ತವಾಗಿ ಪ್ರತಿಪಾದನೆ ಮಾಡಿದರೂ ತನ್ನ ಅನುಭವ ಮಿಥ್ಯವೆಂದು ಅವನು ಒಪ್ಪುವುದಿಲ್ಲ. ಈ ಅನುಭವ ದೊರೆಯದಿದ್ದವನಿಗೆ ಯಾರೆಷ್ಟು ಶಪಥ ಮಾಡಿ ಹೇಳಿದರೂ ಅದರಲ್ಲಿ ನಂಬಿಕೆ ಹುಟ್ಟುವುದಿಲ್ಲ. ಹೀಗೆ ಕಾವ್ಯಾನುಭವಕ್ಕೆ ಪ್ರಮಾಣಾಂತರದ ಹಂಗಿಲ್ಲ. ಅನುಭವವೇ ಅದರ ಸತ್ಯ. ಕಾವ್ಯದಲ್ಲಿ ತಿಳಿಯಬರತಕ್ಕದ್ದು ದಿಟವೇ ಸುಳ್ಳೇ ಎಂಬುದನ್ನು ನಿರ್ಣಯಿಸಲು ಪ್ರತ್ಯಕ್ಷ ಅನುಮಾನಾದಿ ಪ್ರಮಾಣಗಳನ್ನು ಯಾರಾದರೂ ತಂದೊಡ್ಡಿದರೆ ಅವರು ಉಪಹಾಸಕ್ಕೆ ಗುರಿಯಾಗುತ್ತಾರೆ. ರಸಾನುಭವದೊಂದಿಗೆ, ಅದರ ಮೂಲಕವೇ ತತ್ವಜ್ಞಾನಾದಿಗಳೂ ವಾಚಕನಿಗೆ ಬರಬಹುದು. ಆದರೆ ಅವೆಲ್ಲಾ ಅನುಷಂಗಿಕ ಫಲಗಳು. ಅವು ಬರಲಿ, ಬಾರದಿರಲಿ ಕಾವ್ಯತ್ವಕ್ಕೆ ಚ್ಯುತಿಯಿಲ್ಲ.

ಶಾಸ್ತ್ರ ಕಾವ್ಯಗಳ ಗುರಿಯು ದಾರಿಯೂ ಬೇರೆಯಾದ ಮಾತ್ರಕ್ಕೆ ಶಾಸ್ತ್ರದ ವಸ್ತುವಿಗೆ ಕಾವ್ಯದಲ್ಲಿ ಪ್ರವೇಶವಿಲ್ಲದೆ ಹೋಗಿಲ್ಲ. ಕಾವ್ಯಕ್ಕೆ ವಿಷಯವಾಗದ ವಸ್ತು ಯಾವುದುಂಟು ? ಶಾಸ್ತ್ರದ ಸಂಗತಿಗಳೂ ಇಲ್ಲಿ ಬೇಕಾದಷ್ಟು ಬರಬಹುದು. ಆದರೆ, ಕಾವ್ಯಮಂದಿರವನ್ನು ಹೊಕ್ಕ ಕೂಡಲೇ ಅವುಗಳ ಬಣ್ಣವೇ ಬದಲಾಯಿಸುತ್ತದೆ. ಅಲ್ಲಿ ಶುಷ್ಕವಾಗಿದ್ದುದ್ದೆಲ್ಲ ಇಲ್ಲಿ ಮನೋಹರವಾಗುತ್ತದೆ.

(ಭಾರತೀಯ ಕಾವ್ಯಮೀಮಾಂಸೆ ಪುಟ : 104, 105)

ಹೀಗೆ ಪುಸ್ತಕದ ಯಾವುದೇ ಭಾಗವನ್ನು ನೋಡಿದರೂ ಅಲ್ಲಿ ಕಾವ್ಯ ಮೀಮಾಂಸೆಯ ಸಮರ್ಥ ಸ್ಥೂಲ ಪರಿಚಯ ವಾಗುತ್ತದೆ.

ಈ ಕೃತಿಯ ಬರವಣಿಗೆಯ ಸೊಗಸೂ, ಸಂಶೋಧನೆಯ ತಿರುಳೂ ಸ್ವೋಪಜ್ಞತೆ ಯಿಂದ ಮಡುಗಟ್ಟಿದೆ. ಕುವೆಂಪು ಅವರು ತಮ್ಮ ಮುನ್ನುಡಿಯಲ್ಲಿ "ಸುಸಮರ್ಥವೂ ಮಾರ್ಗದರ್ಶಕವೂ ಆಗಿರುವ ಒಂದು ಆಚಾರ್ಯ ಕೃತಿ" ಎಂದಿದ್ದಾರೆ. ಇಂದಿನ ಸಾಹಿತ್ಯವಲಯದ ಅವಾಂತರಗಳು ಶ್ರೇಷ್ಠತೆಯ ಬಗೆಗಿನ ಗೊಂದಲಗಳು ಸೂಕ್ಷ್ಮ ಸಂವೇದನಾಶೀಲ ಹಾಗು ಪ್ರಜ್ಞಾವಂತ ಸಹೃದಯರನ್ನು ಕಂಗೆಡಿಸಿದೆ. ಈ ಸಂದರ್ಭ ದಲ್ಲಿ ಗಂಭೀರವಾದ, ಅಷ್ಟೇ ವ್ಯಾಪ್ತಿಯುಳ್ಳ ಈ ಕೃತಿ 'ಬೆಟ್ಟದ ತಪ್ಪಲಿನ ಝರಿಯಂತೆ.' ಸಾಹಿತಿಗಳೆಂದು ಕರೆಸಿಕೊಳ್ಳುವ ಅನೇಕರಂತೆ ಡಾಕ್ಟರೇಟು, ಅಧ್ಯಕ್ಷ ಪದವಿ, ಪ್ರಶಸ್ತಿಗಾಗಿ ಮಾತೆತ್ತಲಿಲ್ಲ. 'ಪಂಪ ಪ್ರಶಸ್ತಿ' ಪಡೆದುಕೊಂಡ 'ಭಾರತೀಯ ಕಾವ್ಯ ಮೀಮಾಂಸೆ' ಕನ್ನಡ ಕಾವ್ಯ ಸಂದರ್ಭದ ಮಹತ್ವದ ಕೃತಿ. ಅವರು ಒಂದೆಡೆ ಹೇಳಿರುವ ಮಾತು ಇಂದಿನ ಯುವ ಬರಹಗಾರರಿಗೆ ಆದರ್ಶಪ್ರಾಯ. "ನನಗೆ ಒಗ್ಗುವ ಹಾದಿ ಪದ್ಯಕ್ಕಿಂತ ಹೆಚ್ಚಾಗಿ ಗದ್ಯ. ಎರಡಕ್ಕಿಂತ ಹೆಚ್ಚಾಗಿ ಮೌನ" ಎಂತಹ ಅರ್ಥಪೂರ್ಣ ಮಾತಲ್ಲವೆ ?

# ಎಂ. ವಿ. ಸೀ. : ಉಳಿದ ನೆನಪು

ಡಿ. ವಿ. ಪ್ರಹ್ಲಾದ್

ಯಾವುದೇ ವ್ಯಕ್ತಿ ನಮ್ಮಿಂದ ದೂರವಾದಾಗ ಅವರ ಜೊತೆಗಿನ ನಮ್ಮ ಅನುಭವಗಳು ಒಂದು ರೀತಿಯ ವಿಶಿಷ್ಟತೆ ಪಡೆಯುತ್ತದೆ. ಒಮ್ಮೊಮ್ಮೆ ಅವರನ್ನ ಅತಿಯಾಗಿ ಹೊಗಳುವ ಅಥವಾ ಗುಣಗಾನ ಮಾಡುವ ಕೆಲಸವೂ ಆಗಿಬಿಡುತ್ತದೆ. ನಮ್ಮ ನಡುವಿನ ಹಿರಿಯರಾಗಿದ್ದ ಪ್ರೊ॥ ಎಂ. ವಿ. ಸೀ. ಈಚೆಗೆ ನಿಧನರಾದಾಗ ಅನ್ನಿಸಿದ್ದು ; ಬೆಂಗಳೂರಿನ ಗವೀಪುರದಲ್ಲಿದ್ದ ಮಾಸ್ತಿಯವರ ನಂತರ ಅವರದ್ದೇ ರೀತಿಯ ಜೀವನ ಶೈಲಿ ನಂಬಿಕೆಗಳ ಮತ್ತೊಂದು ಹಿರಿಯ ಜೀವ ಮರೆಯಾಯ್ತು ಎಂದು. ಯಾರಾದರೂ ನಮ್ಮ ನಡುವೆಯೇ ಇದ್ದಲ್ಲಿ ಅವರ ವಿಶಿಷ್ಟತೆ, ಹಿರಿತನಗಳು ನಮ್ಮ ಗೋಚರಕ್ಕೇ ಬರುವುದಿಲ್ಲ. ಅವರನ್ನ ನಾವು ಕಳಕೊಂಡಾಗ ಒಮ್ಮೆಲೆ ಅವರ ಜೀವನ ನಮ್ಮದರ ಜೊತೆ ನಡೆಸಿದ ಸಂಪರ್ಕ ಸಂಬಂಧಗಳು ನೆನಪಿಗೆ ಬರುತ್ತದೆ.

ಎಂ. ವಿ. ಸೀ. ನಮ್ಮ ನಡುವೆ ಇದ್ದ ಮುಗ್ಧ ಜೀವನದ, ತಾವು ನಂಬಿದ ಮೌಲ್ಯಗಳನ್ನ ಎಂದೂ ಪ್ರಶ್ನಿಸದೆ ಹೃದಯವಂತಿಕೆಯ ಜೊತೆ ಬದುಕಿದ್ದವರು. ಸಾಹಿತ್ಯದ ಬಗೆಗಿನ ಬರೀ ಮಾತಾಡುವ ಅನೇಕರಿಗೆ ಸಂಗತರಾಗಿ ಕಾಣದಿದ್ದರೂ, ಅವರು out dated ಎನಿಸಿದರೂ, ಅವರ ಶ್ರದ್ಧೆತುಂಬಿದ ಸಾಹಿತ್ಯದ ಕೆಲಸ ಬಹಳ ದಿನ ಬದುಕುವಂಥಾದ್ದು.

ನಮ್ಮ ಗುಂಪಿಗೆ ಅವರ ಪರಿಚಯ ಕೆಲವೇ ವರ್ಷಗಳ ಕೆಳಗಾಗಿದ್ದರೂ, ಅವರ ಜೊತೆಗಿನ ಒಡನಾಟ ಅನೇಕ ಉತ್ತಮ ಅನುಭವಗಳಿಗೆ ದಾರಿಯಾಗಿತ್ತು. ಆಗಿನ್ನೂ ಸಂಚಯದ ಆರಂಭದ ದಿನಗಳು. ನಾವುಗಳು ಅವರಿಗೆ ಪರಿಚಯವಾದದ್ದೇ ಡಿ.ವಿ.ಜಿ. ಯವರ portrait ಗೋಖಲೆ ಸಂಸ್ಥೆಗೆ ಬರೆದುಕೊಡುವ ಮೂಲಕ, ನಂತರ ಪ್ರತಿಷ್ಠಾನದ ಕೆಲವು ಪುಸ್ತಕಗಳಿಗೆ ಮುಖಪುಟ ವಿನ್ಯಾಸಮಾಡಿಕೊಡುತ್ತಿದ್ದ ಗೆಳೆಯ ರವಿ. ಅವರ ಇಳಿ ವಯಸ್ಸಿನಲ್ಲೂ ತಮ್ಮ ಪುಸ್ತಕವೊಂದಕ್ಕೆ ತಾವೇ ಮುಖಪುಟ ರಚಿಸಿದ್ದರು. 'ಸಂಚಯ'ದ ಮೊದಲನೆಯ ಮುದ್ರಿತ ಸಂಚಿಕೆಗೆ ಅವರ ಸಂದರ್ಶನ

ಕೊಡಲು ಕೇಳಿದಾಗ ಇತರರ ಹಾಗೆ ಜಂಭ ಮಾಡದೆ ಒಪ್ಪಿಕೊಂಡು ನಮ್ಮ ಜೊತೆಗೆ ಮುಕ್ತವಾಗಿ ಬೆರೆತಿದ್ದರು. ಆವತ್ತು ತಮ್ಮ ಬಾಲ್ಯದ ಸಂಗೀತದ ಗೀಳಿನ ಬಗ್ಗೆ, ಚಿತ್ರಕಲೆ ಕಲಿತದ್ದು, ಕಲಾವಿದ ವೆಂಕಟಪ್ಪನವರ ಶಿಷ್ಯರಾದದ್ದು, ನಂತರ ಇವರಿಗೆ ಮದುವೆಯಾಗಿದ್ದ ವಿಷಯ ತಿಳಿದು ಅವರು ಇವರ ಶಿಷ್ಯತ್ವ ನಿರಾಕರಿಸಿದ್ದು, ಈಗಲೂ ತಾನು ಬ್ರಷ್ ಹಿಡಿದು ಬರೆಯಬಲ್ಲೆ ಎನ್ನುವಾಗಿನ ಅವರ ಉತ್ಸುಕತೆ ನೆನಪಾಗು ವಂಥಾದ್ದು, ಸುರುಟಿಕೊಂಡಿದ್ದ ಬೆರಳುಗಳಿಂದ ಅವರು ಬರೆಯುತ್ತಿದ್ದದ್ದನ್ನ, ವಿಸ್ಮಯದಿಂದ ನೋಡುತ್ತಿದ್ದೆ. ಕುಳ್ಳಗಿನ ಗುಬ್ಬಚ್ಚಿಯ ನೆನಪಾಗುವ ಅವರ ದೇಹ ದಲ್ಲಿ ವಿಶಾಲ ಮನಸ್ಸು ನಿರಂತರವಾದ ಚೈತನ್ಯಗಳು ಹರಿಯುತ್ತಿದ್ದದ್ದು ಕಾಣುತ್ತಿತ್ತು. ಅವರ ಸಂದರ್ಶನದಲ್ಲಿ ಅವರ ನೆನಪುಗಳನ್ನ ಅನುಭವಗಳನ್ನ ಹೇಳಿಕೊಳ್ಳುವ ಭರದಲ್ಲಿ ಅದೊಂದು ಹರಟೆಯಾಯ್ತು. ಕೇಳಬೇಕೆಂದುಕೊಂಡಿದ್ದ ಪ್ರಶ್ನೆಗಳ ಹಾಗೇ ಉಳಿದಿತ್ತು ಮತ್ತೆ ಅವರನ್ನ ಚರ್ಚೆಯ ಜಾಡಿಗೆಳೆಯಲು ಬಲು ಪ್ರಯಾಸಪಟ್ಟಿದ್ದೆ.

ನಾಡು ನುಡಿಗಳ ಬಗೆಗಿನ ಅವರ ಎಚ್ಚರ ಕಾಳಜಿಗಳು ಅವರ ವಿಶಿಷ್ಟತೆ. ಸದಾ ಅನಾರೋಗ್ಯ ಅವರನ್ನ ಕಾಡಿದ್ದರೂ ಅವರ ಚಟುವಟಿಕೆ-ಶ್ರದ್ಧೆ ತುಂಬಿದ ಬದುಕು ಇವತ್ತಿನ ಪರಿಸರದಲ್ಲಿ ವಿರಳವಾದದ್ದು. ಅದೊಂದು ಚೈತನ್ಯದ ಯಾನ. ಹತ್ತುವರ್ಷ ತುಂಬಿದ ಅವರ ಕನಸಿನ ಕೂಸು ಬಿ.ಎಂ.ಶ್ರೀ. ಪ್ರತಿಷ್ಠಾನ. ಅನೇಕ ಅರ್ಥಪೂರ್ಣ ಕೆಲಸಗಳಲ್ಲಿ ತೊಡಗಿದೆ. ಈ ವರ್ಷ 80 ತುಂಬಿದ ಎಂ.ವಿ.ಸೀ.ಯವರಿಗೆ ಅಭಿನಂದನಾ ಸಮಿತಿಯೊಂದು ರೂಪುಗೊಂಡಿತ್ತು. ಆದರೆ ಈಗ ನಾವು ಅಭಿನಂದಿಸಬಹುದಾದದ್ದು ಅವರ ನೆನಪು ಕಾರ್ಯಗಳನ್ನು ಮಾತ್ರ.



ಹಿರಿಯರು ಹೇಳಿದ ಮಾತೂ ಇರಲಿ, ನಾವೂ ವಿಚಾರ ಮಾಡೋಣ.
ತಿಳಿದುಕೊಳ್ಳೋಣ, ತಿಳಿದು ನಡೆಯೋಣ ಎನ್ನುವುದು ಪುನರುಜ್ಜೀವನ.

ಬಿ. ಎಂ. ಶ್ರೀ.

# ಕೋತಿ ಮತ್ತು ಹೇನು

ಸ. ರಘುನಾಥ

ಮರದ ಮೇಲೆರಡು ಕೋತಿ
ಅದು ಕೆರೆದಲ್ಲಿ ಇದರ ಕೈ
ಸಿಕ್ಕಿದ್ದು ನೇರ ಬಾಯಿಗೆ
ಉಳಿದದ್ದು ಇದರ ಮೈಗೆ.

ಇದು ಕೆರೆದಲ್ಲಿ ಅದರ ಕೈ
ಮುಂದುವರೆದು, ಸಿಕ್ಕಿದ್ದು ಬಾಯ್ಗೆ
ಉಳಿದದ್ದು ಅದರ ಮೈಗೆ.

ಬೇಸರವೋ
ಕಂಡ ತಿನಿಸು ದಕ್ಕಿಸಿಕೊಳ್ಳುವ ಆತುರವೊ
ಛಂಗನೆ ನೆಗೆದು ಹೋದದ್ದೆ
ಅದರ ಬಾಲದ ಜಾಡಲ್ಲಿ ಇದು.

ಮತ್ತೆ ಕುಳಿತಲ್ಲಿ ಕೆರೆತ
ಅಲ್ಲಿದರ ಕೈ ಮಿಡಿತ
ಇದರ ಮೈಗೆ ಅದರ ಹೇನು
ಅದರ ಮೈಗೆ ಇದರ ಹೇನು
ಒಂದಷ್ಟು ಮರಿಗೂ ರವಾನೆ.

ಹೀಗೇ
ಈಗ ನೋಡಿಕೊಳ್ಳಿ
ನಿಮ್ಮ ತಲೆ
ಅಲ್ಲೂ ಹೇನು !

# ಚೈತ್ರ ಪಲ್ಲವ

ಮಮತಾ ಜಿ. ಸಾಗರ

ಬಿರುಕು ಕಂಬಗಳ ಸೀಳಿ ಬರುವ ನವ ಪಲ್ಲವ ;
ಶಿಥಿಲ ಹಿಮಕೂಟದ ಶ್ವೇತ ಮಕುಟದಲಿ
ಕೃಷ್ಣ ಲೋಹ ರಸರತ್ನ ಹೆಪ್ಪು ಗಟ್ಟಿ ಹೊಳೆದಾಗ
ಕುಹೂSS ಕುಹೂSS ವಿಗೊಂದು ಪ್ರಯತ್ನ
ಬಿರುಕುಗಳ ದಾಟಿ, ಹೊತ್ತಿ ಉರಿದು,
ಮಸುಕು ಕಂಗಳಲಿ ಪ್ರಜ್ವಲಿಸು ಬಾ !
ಗುಡ್ಡದ ಗುಡಿಸಲ ತಡಿ–ಚಾಪೆ, ಹಾಳೆ–ಹೊಚ್ಚುಗಳ
ಹಾರಿ ಬಿಟ್ಟು ;
ಸಂಜೆ ಸೂರ್ಯನ ಕೆಂಪಿಗೆ ಬೆಚ್ಚಗಾಗುವ ಬಯಕೆ.

ತ್ರಸ್ತ ಭಿಕ್ಷುವಿಗೆ ಕಾವಿಯಪ್ಪುಗೆಯಲ್ಲಿ, ಕದ್ದು ಹಣಕುವ ಚೈತ್ರ-
ಜಾಲರಿ ಮುಖದ ಸುಕ್ಕುಗಳನರಳಿಸಿ
ಒಸಡು ಒತ್ತುತ್ತಾ ಸಿಹಿ ಸವಿಯುವ ಬಯಕೆ !
ಪದರು ಪದರುಗಳ ಹರಿದು, ಆಳ ಕಾಡಿಗೆ ಇಳಿದು
ಸ್ಫೋಟವಾಗಿ ಉಕ್ಕುವ ಜ್ವಾಲಾ ಮುಖಿ.

ಬಿದಿರ ಮಟ್ಟಿಯ ತಿಕ್ಕಾಟ ಹೆತ್ತ ಕಾಳ್ಗಿಚ್ಚು
ಕಗ್ಗತ್ತಲ ಕಾಡಿಗೆ ಬೆಳ್ಳಂಬೆಳಕು.
ಮೋಡದದ್ದೊದಿಕೆಯ ಹಿಂದೆ ಗುಡುಗುಗಳ ಗೊಣಗಾಟ.
ಸಿಡಿಲ ಮಡಿಲನು ಹರಿದು ಮಿಂಚುತ್ತ,
ಮಳೆ ಬಂತು ! ಮಳೆ ಬಂತು !

ಕೆಂಪು, ಹಸಿರು, ಹಳದಿಯಾಗಿ
ಸದಾ ಚಿಗುರುವ ನಿತ್ಯ ಚೈತ್ರ
ಎಲ್ಲೆಲ್ಲೂ ಅಳತೆಗೋಲನು ಮೀರಿ
ದಿಗಂತದೆತ್ತರಕ್ಕೆ ಹಾಡುವ ಅದೇ ಹಾಡು,
ಅದೇ ಪಲ್ಲವಿ, ಅದೇ ರಾಗ, ಅದೇ ತಾಳ....
ಎಲ್ಲ ಅದೇ !.... ಅದೇ ! !

ಬದಲಾಗದ 'ನಾನು' ಹಿಂದೆ, ಮುಂದೆ ಎಲ್ಲೆಲ್ಲೂ
ಕೈ ಚಾಚಿದಷ್ಟೂ ದೂರ.... ಅನಂತ.
ನಿರಂತರ ವರ್ತಮಾನಗಳಲ್ಲಿ ವರ್ತಮಾನವಾಗುವ
ನಿತ್ಯ ಚೈತ್ರ ಪಲ್ಲವ,



....ಆದರವಿರದ ಕದವಿರದ ಹೆಸರಿರದ ಇನ್ನೊಂದು ಮನೆಗೆ
ಹೊಸತು ಹಳೆಯೆದು ಎಲ್ಲ ಯಾತ್ರೆ ಹೊರಟಿದ್ದೇವೆ
ಅಲ್ಲಿ ತಡೆಯುವರಿಲ್ಲ
ಒಳಗೆ ಕರೆಯುವರಿಲ್ಲ
ಇನ್ನೊಂದು ಮನೆಯಿಲ್ಲ
ಹೊರ ಮನೆಯ ನೆರಳಿಲ್ಲ
ಹೋದವರು ಹಿಂತಿರುಗಿ ಬರಲು ಹಾದಿಗಳಿಲ್ಲ !
ಅದೇ ಕಡೆಯ ಮನೆ !
ಬಾಂದಳದ ತಾರೆಗಳ ಓರೆಗಣ್ಣಿನ ಕೆಳಗೆ
ಆಗಾಗ ಬೀಸುವುದು ಬಯಲ ಗಾಳಿ

**ಕೆ. ಎಸ್. ನ.**
(ಮನೆಯಿಂದ ಮನೆಗೆ)

# ಹೂವಾಡಗಿತ್ತಿ

ಸಿ. ಎಸ್. ಸವಿತ

ಋತು ಮುಗಿದ ಗಿಡದ
ಬಿಡಿ ಕನಸುಗಳ ಆಯ್ದು
ತಂದು ಜೋಡಿಸಿ
ಮಾಲೆ ಕಟ್ಟುವ

ಹಲಗೆ ಮೇಲೆ ಮಾಲೆ
ನಾಜೂಕು
ಚಲಿಸುವ ಬೆರಳು
ಇಪ್ಪತ್ತರ ಹರಳು.

ಬಂದವರ ಬಯಕೆ ಏನುಂಟೊ
ನೆದರಿಲ್ಲ ಕೊಂಚ
ಕಟ್ಟುವುದಷ್ಟೆ ಕಾಯಕವಾದಂತೆ
ಕನಸುಗಳ ಹಿನ್ನೆಲೆಗೆ.

ಸಂಜೆ ದುಡಿಮೆಯ ಫಲ
ಕೊಟ್ಟಷ್ಟು ಪರಮಾತ್ಮ
ತೃಪ್ತ ನಗೆಯುಲಿ ಮೈಯು
ನರನರದಲ್ಲಿ ಪರಿಮಳದ ಸಂಚು.

ಅರಳು ಹೂಗಳ ನಾಯ್ದು
ಮೊಗ್ಗು ನಾಳೆಗೆ ಎಂದು
ದೀಪವ ಮುಡಿಸಿ
ಮನೆ ದೇವರಿಗೆ ನಮಿಸಿ

ಅರಳು ಹೂಗಳ ಮುಡಿದು
ಮುಗುಳು ನಗುವಳು ಅವಳು
ಸಹಜ ಸರಳತೆಯಲ್ಲಿ
ತನಗಿಡೀ ಲೋಕ ಸ್ವೀಕಾರವೆಂಬಂತೆ.

# ಬೇಸತ್ತಿರುಳ ರುದ್ರಭೂಮಿಯ ಸ್ತಬ್ಧ ಚಿತ್ರ

ಮ. ಸ. ಆನಂದ

ಕತ್ತಲ ರಾತ್ರಿಯ ಆಗಸದ
ತೂತು ಪತ್ತಲದಡಿ
ರುದ್ರಭೂಮಿಯ ಸ್ತಬ್ಧ ಚಿತ್ರ
ಸಮಚತುಷ್ಕೋನಾಕೃತಿ ಕೆಳಗೆ
ಜೀವ ಮರೆತ ದೇಹ ಪಳೆಯುಳಿಕೆ
ಸ್ವಚ್ಛ ವಿಚ್ಛಿದ್ರ ಬಣ್ಣ
ಸುಟ್ಟ ಹೆಣದ ಸುತ್ತ ಬೂದಿ ಗಪ್ಪು
ಬದುಕಲ್ಲದ, ಸಾವಲ್ಲದ ಗೋರಿ
ಹಾಡಿದೆ ಅನಂತ ಸ್ವರ ಸಂಯೋಜಿತ
ವಿಭ್ರಮಿತ ವಿದ್ರಾವಕ ಚರಮಗೀತೆಯ
ಪಲ್ಲವಿ
ಭಗ್ನಾವಶೇಷಗಳ ನಡುವೆ
ತುಂಡು ತುಂಡು ಗಾಳಿಯ
ನಿಶ್ಶಬ್ಧ ರೋದನ
ಮೇಲೆ
ಸತ್ತ ಚಂದ್ರನ ಶವಯಾತ್ರೆಯ
ಮೌನ ಮೆರವಣಿಗೆ
ಏನೋ ವ್ಯಾಕುಲತೆ, ವಿಲಕ್ಷಣ ಸಂಕಟ,
ಆರಂಭ ಅಂತ್ಯದ ಮಧ್ಯದ
ನಾಲ್ಕನೇ ಆಯಾಮದಲ್ಲಿ
ಸಾವಿಲ್ಲದ ಸಮಾಧಿಯ

ಹುಡುಕುವ ಹುಚ್ಚು ಆಸೆಯು ಮನದ
ವ್ಯರ್ಥ ಯತ್ನ
ಲೇಖನಿ ಮಸಿ ಸಾಲದಾಗಿತ್ತು, ಭಾವನೆಯು ಬರೆಯೆ,
ಬೇಕಿತ್ತು ಬಿಸಿಮಿದುಳ,
ಹಸಿ ಹಸಿ ದ್ರವ
ಗುಂಡಿಗೆ ಸಿಡಿದಿತ್ತು,
ಸದ್ದಿಲ್ಲದ ಗೋಳಿಗೆ ಇರುಳ ಕಣ್ಣು
ಕರಗಿ ಇಬ್ಬನಿ
ಮರಣ ಮಸಣ ಹುಲ್ಲಿನ ಮೇಲೆ.



ಮಳೆಯಿಂದ ಸುರಿದ ನೀರು, ನೆಲದ ಮೇಲೆ ಸಳ ಸಳ ಹರಿದು ಹೋಗುವುದಕ್ಕೂ, ಅದೇ ನೀರು ನೆಲದಲ್ಲಿ ಇಂಗಿ ಮುಂದೆ ಒಂದೆಡೆಯಲ್ಲಿ ಚಿಲುಮೆಯಾಗಿ ಪುಟಿಯುವುದಕ್ಕೂ ಇರುವ ಅಂತರವೇ ಗದ್ಯ ಹಾಗು ಪದ್ಯಗಳ ಬರವಣಿಗೆಗೆ ಇರುವ ಅಂತರ.

ಚನ್ನವೀರ ಕಣವಿ

# ಒಂದು ಹೊಸ ಸಂಕಲನ

ದಾರಿಗೆ ಹಚ್ಚಿದ ದೀಪ (ಕವನ ಸಂಕಲನ) : ವಿವಿಧ ಕವಿಗಳು, ಬೆಲೆ : 6-00 ರೂ.
ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಪ್ರಕಟಣೆ, 48 ಪುಟಗಳು

ಕ್ರೈಸ್ಟ್ ಕಾಲೇಜು ಕನ್ನಡ ಸಂಘ ತನ್ನದೇ ವಿಶಿಷ್ಟ ರೀತಿಯಲ್ಲಿ ಗಂಭೀರವಾಗಿ ಸಾಹಿತ್ಯದ ಬಗೆಗಿನ ಉಪಯುಕ್ತ ಕೆಲಸದಲ್ಲಿ ತಲ್ಲೀನವಾಗಿದೆ. ಈ ವರ್ಷದ ವಿದ್ಯಾರ್ಥಿಗಳ ಕವನ ಸಂಕಲನ ಹೆಚ್ಚು ಮೌಲಿಕವಾಗಿ ತನ್ನ ಪ್ರಯತ್ನವನ್ನ ಮುಂದುವರೆಸಿದೆ. ಹೊಸ ಬರಹಗಾರರನ್ನ ಪ್ರೋತ್ಸಾಹಿಸುವುದು ಕಷ್ಟದ ಕೆಲಸವೇ. ಪ್ರೋತ್ಸಾಹದ ಹೆಸ್ರಲ್ಲಿಯಲ್ಲಿ ಕಾಳಿಗಿಂತಾ ಜೊಳ್ಳೇ ಹೆಚ್ಚಾಗಿಬಿಡುತ್ತದೆ. ಪ್ರತಿ ವರ್ಷವೂ ಅನೇಕ ಉದಯೋನ್ಮುಖರ ಕವನ ಸಂಗ್ರಹಗಳು ಪರಸ್ಪರ ಸಹಕಾರದಿಂದಲೋ ಪ್ರಕಾಶಕರ ಕೃಪೆಯಿಂದಲೋ ಹೊರಬರುತ್ತಿರುತ್ತವೆ. ಕೆಲವೇ ದಿನಗಳಲ್ಲಿ ಅವು ಹಳೇ ಪುಸ್ತಕದ ಅಂಗಡಿಯಲ್ಲಿ ಸಿಗುತ್ತವೆ. ನಿಜಕ್ಕೂ ಕವನ ಸಂಕಲನವನ್ನೋ, ಹೊಸ ಪುಸ್ತಕವನ್ನೋ ಪ್ರಕಟಿಸುವವರು ಸ್ವಲ್ಪವಾದರೂ ಗಂಭೀರವಾಗಿ ಯೋಚಿಸಬೇಕು. ಕಾವ್ಯ ಕಟ್ಟುವ ಕೆಲಸ ನಿರಂತರ ತಪಸ್ಸು ಎಂಬುದನ್ನ ಬರೆಯುವವರೂ ಅರಿಯಬೇಕು. ತಾಳ್ಮೆ ಕಾಯುವಿಕೆ ಅದಕ್ಕೆ ಅಗತ್ಯವಾಗಿ ಬೇಕು. ಅದನ್ನ ಪ್ರಕಟಿಸುವವರೂ ಅದನ್ನೊಂದು ಬರೀ ಹಣ ಮಾಡುವ ಉದ್ಯೋಗ ಮಾಡದೆ, ಸಾಧ್ಯವಾದಷ್ಟೂ ಉತ್ತಮವಾದದ್ದನ್ನ ಕೊಡುವ ಯೋಜನೆ ಪ್ರಯತ್ನ ಮಾಡಬೇಕು.

ಕ್ರೈಸ್ಟ್ ಕಾಲೇಜಿನ ಈ ಪುಸ್ತಕ ಎಂಟನೆಯ ವರ್ಷದ ಪ್ರಕಟಣೆ. ಇದು ಇತರೆ ಎಲ್ಲಾ ಸಂಘ ಸಂಸ್ಥೆಗಳಿಗೆ ಆದರ್ಶವಾಗಬಲ್ಲದು. ಈ ರೀತಿಯ ಸಾಧನೆ ನಿರಂತರವಾಗಿ ನಡೆಯಲಿ ಎಂದು ಹಾರೈಸುತ್ತಾ ಲೇಖನ ಮತ್ತು ಕವನ ಸ್ಪರ್ಧೆಗಳಲ್ಲಿ ಆಯ್ಕೆಯಾದ ಎಲ್ಲಾ ಗೆಳೆಯರನ್ನು ಸಂಚಯ ಅಭಿನಂದಿಸುತ್ತದೆ.

---



---

# ಬಡಕಲೆತ್ತು

ನಡು ಬೇಸಗೆ ನಡು ಹಗಲು
ಸುಡು ಸುಡು ಸುಡು ಟಾರ್ ರಸ್ತೆ
ನೋಡಿ ನೋಡಿ ; ಬೀದಿ ಗಾಡಿ
ಪೇರಿಸಿದೆ ಮೂಟೆ ಮೂಟೆ
ಜಗ್ಗಿ ಜಗ್ಗಿ ಎಳೆವ ಪ್ರಾಣಿ ;
ಪ್ರಾಣಿಯೋ ನಿತ್ರಾಣಿಯೋ ?
ಚಲಿಸುವಶ್ವ ಶಕ್ತಿಗೆ
ಆಕೃತಿಯನು ನೀಡಿ
ಚತುರ ಶಿಲ್ಪಿ ಕಂಡರಿಸಿದ
ಕಗ್ಗಲ್ಲಿನ ಚರಮೂರ್ತಿಯೋ ?
ಮಿರಮಿರನೆ ಮಿಂಚುವ ಮೈ
ಎಣ್ಣೆಯ ಬಳಿದಂತೆ
ಚಲಿಸುತ್ತಿವೆ ಕಾಲೆರಡು
ಊರಿ ಊರಿ ಬಾಗಿಬಾಗಿ
ಹಂ ಹಂ ಹಂ ತಿದಿಯೊತ್ತಿ
ಎಳೆಯುತ್ತಿದೆ ಕೈ
ಬಗ್ಗಿದೆ ಬರಿಮೈ
ಎಳೆಯುತ್ತಿರುವೀ ಪ್ರಾಣಿ
ಎತ್ತಲ್ಲ, ಎತ್ತಲ್ಲ ;
ಕಗ್ಗಲ್ಲಿನ ಮೂರ್ತಿಯಲ್ಲಿ
ಕರಿಮೈಯಲಿ ಸುರಿಯುತಿದೆ
ಎಣ್ಣೆಯಿಲ್ಲ, ಎಣ್ಣೆಯಿಲ್ಲ
ದುಡಿಮೆ ಕರಗಿ ಬೆವರ ಜಳಕ
ಗಾಡಿಯೆಳೆಯುತಿರುವ ಪ್ರಾಣಿ
ಯಾರು, ಹತ್ತಿತೇನು ಗೊತ್ತು ?
ಮನುಷ್ಯ ಹೆಸರ ಬಡಕಲೆತ್ತು !

ಎಂ. ವಿ. ಸೀ.
ಇತ್ತೀಚೆಗೆ ಬರೆದ ಕವನ